ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಬಾಪೂಜಿ ಸೇವಾ ಕೇಂದ್ರದಲ್ಲಿ 101 ಸೇವೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಬಗ್ಗೆ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು ):-

653 (815) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ 101 ಸೇವೆಗಳನ್ನು ಗ್ರಾಮ ಪಂಚಾಯತ್ ಮಟ್ಟದಲ್ಲಿ ನೀಡಲು ಉದ್ದೇಶಿಸಿದ ಸರ್ಕಾರದ ಮಹತ್ವಾಕಾಂಕ್ಷಿ ಬಾಪೂಜಿ ಸೇವಾ ಕೇಂದ್ರಗಳಲ್ಲಿ ಈಗ ಎಷ್ಟು ಸೇವೆಗಳನ್ನು ಗ್ರಾಮೀಣ ಪ್ರದೇಶದ ಜನರಿಗೆ ನೀಡಲಾಗುತ್ತಿದೆ ; ಈಗ ನಿಡಲಾಗುತ್ತಿರುವ ಸೇವೆಗಳ ವಿವರ ಒದಗಿಸುವುದು ;

(ಆ) ಕಳೆದ ಮೂರು ವರ್ಷಗಳಲ್ಲಿ ಬಾಪೂಜಿ ಸೇವಾ ಕೇಂದ್ರದಲ್ಲಿ ಸಂಗ್ರಹಿಸಿದ ಸೇವಾ ಶುಲ್ಕವೆಷ್ಟು ; ಬಾಪೂಜಿ ಸೇವಾ ಕೇಂದ್ರಗಳ ನಿರ್ವಹಣೆಗೆ ಮಾಡಲಾದ ವೆಚ್ಚವೆಷ್ಟು ; ಬಾಪೂಜಿ ಸೇವಾ ಕೇಂದ್ರಗಳನ್ನು ಯಾವುದೇ ಲಾಭ ಮತ್ತು ನಷ್ಟವಿಲ್ಲದೇ (No profit no loss) ನಿರ್ವಹಿಸಲು ಹೆಚ್ಚು ಹೆಚ್ಚು ಸೇವೆಗಳನ್ನು ಒದಗಿಸುವ ಮೂಲಕ ಸದೃಡವಾಗಿರುವ ಚಿಂತನೆ ಸರ್ಕಾರದ ಮುಂದಿದೆಯೇ ; ಹಾಗಿದ್ದಲ್ಲಿ, ಯಾವ ಯಾವ ಸೇವೆಗಳನ್ನು ನೀಡುವ ಉದ್ದೇಶವನ್ನು ಹೊಂದಲಾಗಿದೆ ;

(ಇ) ಬಾಪೂಜಿ ಸೇವಾ ಕೇಂದ್ರದಲ್ಲಿ ದೊರೆಯುವ ಸೇವೆಗಳನ್ನು ಪರಿಣಾಮಕಾರಿಯಾಗಿಸಲು ಗ್ರಾಮೀಣಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮತ್ತು ಕಂದಾಯ ಇಲಾಖೆಯ ನಡುವೆ ಸಮನ್ವಯತೆಗೆ ಯಾವ ಕ್ರಮವಹಿಸಲಾಗಿದೆ ;

(ಈ) ರೈತರು ಸರ್ವೆ ಸಮಸ್ಯೆಯಿಂದ ದಿನವಿಡೀ ಕೆಲಸ ಕಾರ್ಯಗಳನ್ನು ಬಿಟ್ಟು ಕಾಯಬೇಕಾದ ಹಿನ್ನಲೆಯಲ್ಲಿ ಮತ್ತು ಗ್ರಾಮೀಣ ಪ್ರದೇಶದ ಜನತೆಯ ಕನಿಷ್ಠ ಅಗತ್ಯವಾದ ಆರ್.ಟಿ.ಸಿ. ಪಡೆಯಲು ಕೂಡಾ ಸಾಧ್ಯವಾಗದಿರುವ ಹಿನ್ನಲೆಯಲ್ಲಿ ರೈತರು ಖಾಸಗಿ ಸೈಬರ್ ಸೆಂಟರ್‌ಗಳಲ್ಲಿ ದುಪ್ಪಟ್ಟು ಬೆಲೆ ನೀಡಿ ಆರ್.ಟಿ.ಸಿ ಖರೀದಿಸುತ್ತಿದ್ದು ಈ ಬಾಪೂಜಿ ಸೇವಾ ಕೇಂದ್ರಗಳು ಜನರಿಂದ ದೂರವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಈ ಕುರಿತು ಸರ್ಕಾರದ ಕ್ರಮವೇನು?